# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **2271**

ಸದಸ್ಯರ ಹೆಸರು : ಶ್ರೀ. ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 26-03-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಸಾರಿಗೆ ಇಲಾಖೆಯಲ್ಲಿ ಅರ್ಜಿ ಸಲ್ಲಿಸಿದ 40 ದಿನಗಳೊಳಗಾಗಿ ಮೋಟಾರು ವಾಹನ ಪರವಾನಗಿ ನೀಡಬೇಕೆಂಬ ಕಾನೂನು ಜಾರಿಯಲ್ಲಿದ್ದರೂ ಡಿಎಲ್ ಪಡೆಯಲು ಆರು ತಿಂಗಳು ಕಾಯಬೇಕಾಗುತ್ತದೆಂದು ದೂರುಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಾರಿಗೆ ಇಲಾಖೆಯಲ್ಲಿ ಚಾಲನಾ ಅನುಜ್ಞಾ ಪತ್ರ ಪಡೆಯಲು ಸಕಾಲದಲ್ಲಿ 30 ಕಾರ್ಯನಿರತ ದಿನಗಳನ್ನು ನಿಗದಿಪಡಿಸಲಾಗಿದೆ. ಅದರಂತೆ ನಿಗದಿತ ಅವಧಿಯ ಒಳಗೆ ಚಾಲನಾ ಅನುಜ್ಞಾ ಪತ್ರಗಳನ್ನು ನೀಡಲಾಗುತ್ತಿದೆ.<br>ಕೆಲವೊಂದು ತಾಂತ್ರಿಕ ಕಾರಣಗಳಿಂದಾಗಿ ಅತಿ ವಿರಳ ಪ್ರಕರಣಗಳಲ್ಲಿ ಚಾಲನಾ ಅನುಜ್ಞಾ ಪತ್ರ ವಿಲೇವಾರಿಯಾಗದಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅದನ್ನು ಕ್ರಮಬದ್ಧವಾಗಿ ಕೂಡಲೇ ಸರಿಪಡಿಸಲಾಗುವುದು. |
| ಆ. | ವಿಳಂಬ ಕುರಿತಂತೆ ಸಾರಿಗೆ ಕಛೇರಿಗಳಲ್ಲಿ ಸರ್ವರ್ ಸಮಸ್ಯೆ, ಸಿಬ್ಬಂದಿಗಳ ಕೊರತೆಯ ಕಾರಣ ನೀಡುತ್ತಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಸಾರಿಗೆ ಇಲಾಖೆಯಲ್ಲಿ ಸಾರ್ವಜನಿಕರಿಗೆ ಒದಗಿಸುವ ಸೇವೆಗಳಿಗೆ ವಿಳಂಬ ಕುರಿತಂತೆ ಯಾವುದೇ ಸರ್ವರ್ ಸಮಸ್ಯೆಗಳು ಇರುವುದಿಲ್ಲ.<br>ಸಿಬ್ಬಂದಿಗಳ ಕೊರತೆಗೆ ಸಂಬಂಧಿಸಿದಂತೆ, ಸರ್ಕಾರವು ಈಗಾಗಲೇ ಅನುಮತಿ ನೀಡಿರುವ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು ಆ ಸಂಬಂಧ ಆಯ್ಕೆ / ನೇಮಕಾತಿ ಪ್ರಕ್ರಿಯೆಯು ಚಾಲನೆಯಲ್ಲಿರುತ್ತದೆ.<br>ಇನ್ನುಳಿದ ಖಾಲಿ ಹುದ್ದೆಗಳ ಪೈಕಿ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿಮಾಡಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ:06-07-2020 ರಲ್ಲಿ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿರುತ್ತದೆ. ಅಲ್ಲದೆ,. ಮುಂಬಡ್ತಿಗೆ ಮೀಸಲಿರುವ ಖಾಲಿ ಹುದ್ದೆಗಳನ್ನು ಹಂತ-ಹಂತವಾಗಿ ಬಡ್ತಿ ನೀಡುವ ಮೂಲಕ ತುಂಬಲಾಗುತ್ತಿದೆ.<br>ಆದಾಗ್ಯೂ ಪ್ರಸ್ತುತ ಲಭ್ಯವಿರುವ ಅಧಿಕಾರಿ/ ಸಿಬ್ಬಂದಿ ವರ್ಗದವರಿಂದ ಹಾಗೂ ಕಿಯೋನಿಕ್ಸ್ ಹಾಗೂ ಇತರೆ ಏಜೆನ್ಸಿ ವತಿಯಿಂದ ಹೊರಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿ ಸೇವೆಯನ್ನು ಪಡೆದು ಸಾರ್ವಜನಿಕರಿಗೆ ತೊಂದರೆಯಾಗದಂತೆ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ. |

--2

| | | |
|---|---|---|
| ಇ. | ರಾಜ್ಯದಲ್ಲಿ ಸಾರಿಗೆ ಇಲಾಖೆಯಲ್ಲಿ ಮಂಜೂರಾದ ಸಿಬ್ಬಂದಿ / ಹಾಲಿ ಇರುವ ಸಿಬ್ಬಂದಿ / ಖಾಲಿ ಇರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; | ರಾಜ್ಯದ ಸಾರಿಗೆ ಇಲಾಖೆಯಲ್ಲಿ ದಿನಾಂಕ: 01-02-2021ರ ಅಂತ್ಯಕ್ಕೆ ಅಧಿಕಾರಿ/ಸಿಬ್ಬಂದಿಗಳ ಒಟ್ಟು 2812 ಮಂಜೂರಾದ ಹುದ್ದೆಗಳಿದ್ದು, 1304 ಕಾರ್ಯನಿರತ ಹುದ್ದೆಗಳು ಮತ್ತು 1508 ಖಾಲಿ ಹುದ್ದೆಗಳಿವೆ. ಹುದ್ದೆಗಳ ವಿವರಗಳನ್ನು "ಅನುಬಂಧ" ದಲ್ಲಿ ಒದಗಿಸಲಾಗಿದೆ. |

ಟಿಡಿ 70 ಟಿಡಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2271ಕ್ಕೆ "ಅನುಬಂಧ"

ಸಾರಿಗೆ ಇಲಾಖೆಯ ಹುದ್ದೆಗಳ ವಿವರ ದಿನಾಂಕ: 01-02-2021 ರಂತೆ

| ಕ್ರ ಸಂ. | ಹುದ್ದೆಯ ಹೆಸರು | ಹುದ್ದೆಗಳ ವಿವರ | | |
|---|---|---|---|---|
| | | ಮಂಜೂರಾತಿ | ಕಾರ್ಯನಿರತ | ಖಾಲಿ |
| 1 | ಸಾರಿಗೆ ಆಯುಕ್ತರು | 1 | 1 | 0 |
| 2 | ಅಧ್ಯಕ್ಷಾಧಿಕಾರಿಗಳು | 1 | 1 | 0 |
| 3 | ಅಪರ ಸಾರಿಗೆ ಆಯುಕ್ತರು | 6 | 6 | 0 |
| 4 | ಜಂಟಿ ಸಾರಿಗೆ ಆಯುಕ್ತರು (1 ಹುದ್ದೆ – ದೇವರಾಜ್ ಅರಸ್ ಟ್ರಕ್ ಟರ್ಮಿನಲ್) | 7 | 7 | 0 |
| 5 | ಉಪ ಸಾರಿಗೆ ಆಯುಕ್ತರು ಮತ್ತು ಹಿರಿಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು | 3 | 2 | 1 |
| 6 | ಪ್ರಾದೇಶಿಕ ಸಾರಿಗೆ ಅಧಿಕಾರಿ | 47 | 42 | 5 |
| 7 | ಎ-ಗ್ರೂಪ್ ಅಧಿಕಾರಿ (ಯೋಜನೆ) | 1 | 0 | 1 |
| 8 | ಎ-ಗ್ರೂಪ್ ಅಧಿಕಾರಿ (ಶಿಕ್ಷಣ) | 1 | 1 | 0 |
| 9 | ಎ-ಗ್ರೂಪ್ ಅಧಿಕಾರಿ (ಆರ್ಥಿಕ) | 1 | 0 | 1 |
| 10 | ಎ-ಗ್ರೂಪ್ ಅಧಿಕಾರಿ (ಲೋಕೋಪಯೋಗಿ) | 1 | 1 | 0 |
| 11 | ಎ-ಗ್ರೂಪ್ ಅಧಿಕಾರಿ (ಪೋಲೀಸ್) | 1 | 1 | 0 |
| 12 | ಎ-ಗ್ರೂಪ್ ಅಧಿಕಾರಿ (ಆರೋಗ್ಯ) | 1 | 1 | 0 |
| 13 | ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ | 103 | 27 | 76 |
| 14 | ಕಾನೂನು ಅಧಿಕಾರಿ | 1 | 1 | 0 |
| 15 | ಸಹಾಯಕ ಕಾನೂನು ಅಧಿಕಾರಿ | 2 | 1 | 1 |
| 16 | ಸಾಂಖ್ಯಿಕ ಸಹಾಯಕ ನಿರ್ದೇಶಕರು (ನಿಯೋಜನೆ ಹುದ್ದೆ) | 1 | 1 | 0 |
| 17 | ಆರ್ಥಿಕ ಸಲಹೆಗಾರರು (ನಿಯೋಜನೆ ಹುದ್ದೆ) | 2 | 1 | 1 |
| 18 | ಲೆಕ್ಕಾಧಿಕಾರಿಗಳು (ನಿಯೋಜನೆ ಹುದ್ದೆ) | 6 | 0 | 6 |
| 19 | ಸಿಸ್ಟಮ್ ಮ್ಯಾನೇಜರ್ (ನಿಯೋಜನೆ ಹುದ್ದೆ) | 1 | 0 | 1 |
| 20 | ಸಿಸ್ಟಮ್ ಅನಲಿಸ್ಟ್ (ನಿಯೋಜನೆ ಹುದ್ದೆ) | 2 | 0 | 2 |
| 21 | ಹಿರಿಯ ಪ್ರೋಗ್ರಾಮರ್ (ನಿಯೋಜನೆ ಹುದ್ದೆ) | 2 | 0 | 2 |
| 22 | ಕಿರಿಯ ಪ್ರೋಗ್ರಾಮರ್ (ನಿಯೋಜನೆ ಹುದ್ದೆ) | 7 | 0 | 7 |
| 23 | ಕನ್ಸೋಲ್ ಆಪರೇಟರ್ | 2 | 1 | 1 |
| 24 | ಕೇ.ಸ್ಥಾ.ಸ/ತೆ.ಖ.ಅ/ಸಹಾಯಕ ಕಾರ್ಯದರ್ಶಿ | 15 | 12 | 3 |
| 25 | ಹಿರಿಯ ಮೋಟಾರು ವಾಹನ ನಿರೀಕ್ಷಕರು | 214 | 93 | 121 |
| 26 | ಮೋಟಾರು ವಾಹನ ನಿರೀಕ್ಷಕರು | 430 | 123 | 307 |
| 27 | ಅಧೀಕ್ಷಕರು | 160 | 147 | 13 |
| 28 | ಲೆಕ್ಕಾಧೀಕ್ಷಕರು (ನಿಯೋಜನೆ ಹುದ್ದೆ) | 26 | 22 | 4 |

--2

| | | | | |
|---|---|---|---|---|
| 29 | ಸಹಾಯಕ ಸಾಂಖ್ಯಿಕ ಅಧಿಕಾರಿ (ನಿಯೋಜನೆ ಹುದ್ದೆ) | 3 | 3 | 0 |
| 30 | ಲೆಕ್ಕ ಸಹಾಯಕರು (ನಿಯೋಜನೆ ಹುದ್ದೆ) | 36 | 18 | 18 |
| 31 | ಶೀಘ್ರಲಿಪಿಗಾರರು | 49 | 25 | 24 |
| 32 | ಪ್ರಥಮ ದರ್ಜೆ ಸಹಾಯಕರು | 436 | 281 | 155 |
| 33 | ದ್ವಿತೀಯ ದರ್ಜೆ ಸಹಾಯಕರು | 546 | 192 | 354 |
| 34 | ಬೆರಳಚ್ಚುಗಾರರು | 116 | 35 | 81 |
| 35 | ಚಾಲಕರು | 165 | 91 | 74 |
| 36 | ಅಟೆಂಡರ್/ಪ್ರೊಸಸ್ ಸರ್ವರ್/ದಫೇದಾರ್ | 31 | 7 | 24 |
| 37 | ಖಜಾನೆ ರಕ್ಷಕ | 40 | 9 | 31 |
| 38 | ದಲಾಯತ್/ಕಾವಲುಗಾರ/ಜವಾನ ಕಮ್ ರಕ್ಷಕ/ಸ್ವೀಪರ್ | 345 | 151 | 194 |
| | **ಒಟ್ಟು** | **2812** | **1304** | **1508** |